RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಅಕ್ಟೋಬರ್ ೩೧, ೨೦೧೩ (ಕಾರ್ತೀಕ ೯, ಶಕ ವರ್ಷ ೧೯೩೫)<br>Bangalore, Thursday, October 31, 2013 (Karthika 9, Shaka Varsha 1935) | ಸಂಚಿಕೆ ೪೩<br>Issue 43 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ : 10/2012ರ ಕರ್ನಾಟಕ ಲೋಕಾಯುಕ್ತ ಪ್ರಕರಣದಲ್ಲಿ ಒಳಗೊಂಡಿರುವ ಶ್ರೀ ಹೆಚ್.ಕೆ. ರುದ್ರಪ್ಪ, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆ ಮೇಲೆ ಪೌರಾಯುಕ್ತರು, ನಗರ ಸಭೆ, ಹಾವೇರಿ ಇವರನ್ನು ಅಭಿಯೋಜನೆಗೆ ಗುರಿಪಡಿಸಲು ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.–ಆದೇಶ

**ಓದಲಾಗಿದೆ:** 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಕಛೇರಿ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಎಲ್–59/ಸಿಆರ್–10/2012 ಹಾವೇರಿ ದಿನಾಂಕ : 26–04–2013.

2) ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯ, ಬೆಂಗಳೂರು ಪತ್ರ ಸಂಖ್ಯೆ : ಕೈವಾಇ/ನಿರೀ–2/ಲೋಕಾ/97/2012–13, ದಿನಾಂಕ : 04–06–2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ 1 ರಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಫಿರ್ಯಾದುದಾರ ಶ್ರೀ ಎಸ್.ಎಂ. ಹಳ್ಳಿಕೇರಿ, ಯಾಲಕ್ಕಿ ಓಣಿ, ಹಾವೇರಿ ಇವರು ಹಾವೇರಿ ಜಿಲ್ಲಾ ಸತ್ರ ಹಾಗೂ ವಿಶೇಷ ನ್ಯಾಯಾಲಯಕ್ಕೆ ಸಲ್ಲಿಸಿರುವ ಖಾಸಗಿ ದೂರು ನಂ. 3/2012 ರಲ್ಲಿ ಪ್ರಕರಣದ ಆಪಾದಿತ–1 ರವರು ಮಾಜಿ ಶಾಸಕರು, ರಾಜ್ಯ ಎಸ್‌ಸಿ/ಎಸ್‌ಟಿ ಸಮಿತಿ ಅಧ್ಯಕ್ಷರು ಹಾಗೂ ಹಾವೇರಿ ನಗರ ಸಭಾ ಸದಸ್ಯರಾಗಿದ್ದು, ಸದರಿಯವರು ಶಾಸಕರ ಅನುದಾನದಲ್ಲಿ ಕಾಮಗಾರಿ ಕೆಲಸಗಳನ್ನು ಮಾಡಿಸುವ ಸಲುವಾಗಿ ಜಿಲ್ಲಾಧಿಕಾರಿ, ಹಾವೇರಿ ಮತ್ತು ಕಾರ್ಯದರ್ಶಿ, ಎಂ.ಎ.ಡಿ.ಬಿ. ಶಿವಮೊಗ್ಗ ಇವರಿಗೆ ಹಣ ಬಿಡುಗಡೆ ಮಾಡಲು ಮನವಿ ಸಲ್ಲಿಸಿ ಆಪಾದಿತ–4 ರಿಂದ 7 ರವರುಗಳನ್ನು ತಮ್ಮ ಅಧಿಕಾರದ ಪ್ರಭಾವಕ್ಕೆ ಒಳಪಡಿಸಿಕೊಂಡು ತನ್ನ ಮಕ್ಕಳಾದ ಆಪಾದಿತ–2 ಮತ್ತು 3 ರವರಿಗೆ ಹಾವೇರಿ ನಗರಸಭೆಯಿಂದ ಸುಳ್ಳು ಕಾಮಗಾರಿ ನಿರ್ವಹಣಾ ಪತ್ರವನ್ನು ಕೊಡಿಸಿ, ಗುತ್ತಿಗೆಯನ್ನು ವಹಿಸಿ ಕೊಟ್ಟಿರುವ ಬಗ್ಗೆ ಆಪಾದಿಸಿ, ಈ ಕೆಳಕಂಡ ಎಲ್ಲಾ ಆಪಾದಿತರುಗಳ ವಿರುದ್ಧ ಸೂಕ್ತ ಕಾನೂನು ಕ್ರಮ ಕೋರಿ ಘನ ನ್ಯಾಯಾಲಯಕ್ಕೆ ಫಿರ್ಯಾದು ಸಲ್ಲಿಸಿರುತ್ತಾರೆ.

1. ನೆಹರು ಸಿ. ಓಲೇಕಾರ, ಶಾಸಕರು, ಹಾವೇರಿ
2. ಮಂಜುನಾಥ ಎನ್. ಓಲೇಕಾರ, ಶಿಡೇನೂರ, ಹಾವೇರಿ ತಾಲ್ಲೂಕು
3. ದೇವರಾಜ ಎನ್. ಓಲೇಕಾರ, ಶಿಡೇನೂರ, ಹಾವೇರಿ ತಾಲ್ಲೂಕು.
4. ಹೆಚ್.ಕೆ. ರುದ್ರಪ್ಪ, ಪೌರಾಯುಕ್ತರು, ನಗರಸಭೆ, ಹಾವೇರಿ.
5. ಹೆಚ್.ಕೆ. ಕಲ್ಲಪ್ಪ, ಎ.ಇ.ಇ. ನಗರಸಭೆ, ಹಾವೇರಿ.
6. ಕೆ. ಮಂಜುನಾಥ, ಜೆ.ಇ. ನಗರಸಭೆ, ಹಾವೇರಿ.
7. ಎಸ್.ಪಿ. ಕಮದೋಡ, ದ್ವಿ.ದ.ಸ. ನಗರಸಭೆ, ಹಾವೇರಿ
8. ಪಿ.ಎಸ್. ಚಂದ್ರಮೋಹನ್, ಎಇಇ ನಗರಸಭೆ, ಹಾವೇರಿ
9. ಕೆ. ಕೃಷ್ಣಾ ನಾಯಕ, ಸಹಾಯಕ ಅಭಿಯಂತರರು, ನಗರಸಭೆ, ಹಾವೇರಿ.

ಆಪಾದಿತ–1 ಶ್ರೀ ನೆಹರು ಸಿ. ಓಲೇಕಾರ ಇವರ ಅಧಿಕಾರ ಪ್ರಭಾವಕ್ಕೆ ಒಳಪಟ್ಟು ಆಪಾದಿತ–2 ಮತ್ತು 3 ಇವರುಗಳಿಗೆ ಸುಳ್ಳು ಕಾಮಗಾರಿ ನಿರ್ವಹಣಾ ದೃಢೀಕರಣವನ್ನು ಒದಗಿಸಿ ಕೊಡುವಲ್ಲಿ ಶ್ರೀ ಹೆಚ್.ಕೆ. ರುದ್ರಪ್ಪ ಇವರು ಕ್ರಿಮಿನಲ್ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ದೃಢಪಟ್ಟಿರುವುದಾಗಿ ವರದಿಯಲ್ಲಿ ತಿಳಿಸಿರುತ್ತಾರೆ. ಸರ್ಕಾರವು ತನಿಖಾ ವರದಿಯ ಬೆರಳಚ್ಚು ಪ್ರತಿ ಪ್ರಥಮ ವರ್ತಮಾನ ವರದಿಯ ಪ್ರತಿ. ದಾಖಲೆಗಳ ಪ್ರತಿಗಳು ಮತ್ತು ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿದೆ.

ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಹಾವೇರಿ ಇವರು ಘನ ನ್ಯಾಯಾಲಯದ ಆದೇಶದ ಮೇರೆಗೆ ಮೇಲ್ಕಂಡ ಆಪಾದಿತರುಗಳು ವಿರುದ್ಧ ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ : 10/2012ರ ಕಲಂ 13(1)(ಡಿ) ಸಹವಾಚನ 13(2) ಲಂಚ ನಿರೋಧಕ ಕಾಯ್ದೆ 1988 ಮತ್ತು ಕಲಂ 197, 409 ಮತ್ತು 420 ಭಾದಸಂ ದಿನಾಂಕ : 30–10–2012ರ ಪ್ರಕಾರವಾಗಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ. ತರುವಾಯ ತನಿಖೆಯನ್ನು ಪೊಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ದಾವಣಗೆರೆ ಇವರು ಮುಂದುವರೆಸಿರುತ್ತಾರೆ.

ಮೇಲ್ಕಂಡ 9 ಜನ ಆಪಾದಿತರುಗಳು ಕಲಂ 13(1)(ಡಿ) ಸಹವಾಚನ 13(2) ಲಂಚ ನಿರೋಧಕ ಕಾಯ್ದೆ 1988 ಮತ್ತು ಕಲಂ 197, 409 ಮತ್ತು 420 ಭಾದಸಂ ಅಡಿಯಲ್ಲಿ ಎಸಗಿರುವ ಅಪರಾಧಕ್ಕೆ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಲು ಅರ್ಹರಾಗಿರುತ್ತಾರೆ. ಆಪಾದಿತರನ್ನು ಅಭಿಯೋಜನೆಗೆ ಒಳಪಡಿಸಲು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಅತ್ಯಗತ್ಯವಾಗಿರುತ್ತದೆ.

ಆದ್ದರಿಂದ ಮೇಲ್ಕಂಡ ಆಪಾದಿತರುಗಳ ಪೈಕಿ ಪ್ರಕರಣದ ಆಪಾದಿತ–4 ಶ್ರೀ ಹೆಚ್.ಕೆ. ರುದ್ರಪ್ಪ, ಪೌರಾಯುಕ್ತರು ನಗರಸಭೆ ಹಾವೇರಿ (ಮಾತೃ ಇಲಾಖೆ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ) ಇವರು ಎಸಗಿರುವ ಅಪರಾಧಕ್ಕೆ ಅಭಿಯೋಜನೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ಕಲಂ 19(1)(ಸಿ) ಮತ್ತು ಕಲಂ 197 ಸಿಆರ್‌ಪಿಸಿ ಅನ್ವಯ ಅಭಿಯೋಜನಾ ಮಂಜೂರಾತಿಯನ್ನು ನೀಡಲು ಕೋರಿದ್ದಾರೆ.

ಶ್ರೀ ಹೆಚ್.ಕೆ. ರುದ್ರಪ್ಪ ಇವರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಎ ದರ್ಜೆ ಅಧಿಕಾರಿಯಾಗಿರುವುದರಿಂದ ಮಾನ್ಯ ಲೋಕಾಯುಕ್ತ ಕಛೇರಿಯಿಂದ ಸ್ವೀಕರಿಸಲಾದ ಪ್ರಸ್ತಾವನೆ ಮತ್ತು ದಾಖಲಾತಿಗಳೊಂದಿಗೆ ಕೈಗಾರಿಕಾಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಬೆಂಗಳೂರು ಇವರು ಸದರಿ ಅಧಿಕಾರಿಯನ್ನು ಅಭಿಯೋಜನೆಗೆ ಗುರಿಪಡಿಸಿ ಅಭಿಯೋಜನಾ ಮಂಜೂರಾತಿಯನ್ನು ನೀಡಲು ಮೇಲೆ ಓದಲಾದ ಕ್ರಮ ಸಂಖ್ಯೆ 2 ರ ಪತ್ರದಲ್ಲಿ ಸರ್ಕಾರವನ್ನು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 231 ಕೈಸೇವಿ 2012, ಬೆಂಗಳೂರು, ದಿನಾಂಕ : 23–07–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಪಾದಿತ ಅಧಿಕಾರಿ ಹಾಗೂ ಪ್ರಕರಣದ ಆರೋಪಿ–4 ಶ್ರೀ ಹೆಚ್.ಕೆ. ರುದ್ರಪ್ಪ, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆ ಮೇಲೆ ಪೌರಾಯುಕ್ತರು, ನಗರ ಸಭೆ, ಹಾವೇರಿ ಇವರನ್ನು ಹುದ್ದೆಯಿಂದ ತೆಗೆದು ಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಹೆಚ್.ಕೆ. ರುದ್ರಪ್ಪ, ಉಪ ನಿರ್ದೇಶಕರು, ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ಕಲಂ 19(1)(ಸಿ) ಮತ್ತು ಕಲಂ 197 ಸಿಆರ್‌ಪಿಸಿ ಅನ್ವಯ ಅಭಿಯೋಜನೆಗೆ ಗುರಿಪಡಿಸಲು ಸರ್ಕಾರವು ಅಭಿಯೋಜನಾ ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ಸರ್ಕಾರದ ವ್ಯವಹಾರ ನಿಯಮಾವಳಿ 1977 ರನ್ವಯ ಈ ಮೇಲ್ಕಂಡ ಆದೇಶವನ್ನು ಈ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ . . . . . . ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR. 906**
**SC-50**

**ಎಸ್. ರೇಣುಕಾರಾಧ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು ಮತ್ತು ಸಮನ್ವಯ).

## ಶಿಕ್ಷಣ ಸಚಿವಾಲಯ

**ವಿಷಯ:** ಸೇವೆಯಲ್ಲಿ ಒಂದೂ ಪದೋನ್ನತಿ ಇಲ್ಲದೆ 25 ಮತ್ತು 30 ವರ್ಷಗಳು ಅದೇ ಹುದ್ದೆಯಲ್ಲಿ ಮುಂದುವರೆದಿರುವ ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿನ ನೌಕರರಿಗೆ ಹೆಚ್ಚುವರಿ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 2012 (VIII) ಬೆಂಗಳೂರು ದಿನಾಂಕ : 14ನೇ ಜೂನ್ 2012.
2) ತಾಂತ್ರಿ ಶಿಕ್ಷಣ ನಿರ್ದೇಶಕರು, ಬೆಂಗಳೂರು ರವರ ಪತ್ರ ಸಂಖ್ಯೆ : ಡಿಟಿಇ 94 ಎಎಸ್‌ಟಿ 4(ಎ) 2012–13/4627 ದಿನಾಂಕ : 03–01–2013.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಂಡಿಕೆ 6(ii) ರಲ್ಲಿ ನಮೂದಿಸಲಾಗಿರುವ ನೌಕರರನ್ನು ಹೊರತುಪಡಿಸಿ, ರಾಜ್ಯ ವೇತನ ಶ್ರೇಣಿಯಲ್ಲಿನ ಮೊದಲ 15 ಶ್ರೇಣಿಯಲ್ಲಿರುವ ಯಾವುದೇ ಒಂದು ಹುದ್ದೆಯಲ್ಲಿ 25 ವರ್ಷ ಮತ್ತು 30 ವರ್ಷಗಳ ಕಾಲ ಒಂದೂ ಪದೋನ್ನತಿ ಪಡೆಯದೆ ಮುಂದುವರೆದಿರುವ ಅಥವಾ ಮುಂದುವರೆಯುವ ಸರ್ಕಾರಿ ನೌಕರನಿಗೆ ಆ ಹುದ್ದೆಗೆ ನಿಗದಿಪಡಿಸಲಾದ ವೇತನ ಶ್ರೇಣಿಯಲ್ಲಿ ಅಥವಾ ಅವನು/ಅವಳು ಹೊಂದಿರುವ ಆಯ್ಕೆಕಾಲಿಕ ವೇತನ ಶ್ರೇಣಿಯಲ್ಲಿ ಅಥವಾ ಹಿರಿಯ ವೇತನ ಶ್ರೇಣಿಯಲ್ಲಿ ಆಯಾ ಪ್ರಕರಣಕ್ಕನ್ವಯ 2ನೇ ಮತ್ತು 3ನೇ ಹೆಚ್ಚುವರಿ ವೇತನ ಬಡ್ತಿಯನ್ನು ದಿನಾಂಕ : 01–04–2012 ರಿಂದ ಜಾರಿಗೆ ಬರುವಂತೆ ಅಥವಾ 25 ಮತ್ತು 30 ವರ್ಷಗಳ ಸೇವೆ ಪೂರ್ಣಗೊಳಿಸಿದ ದಿನಾಂಕದಿಂದ ಜಾರಿಗೆ ಬರುವಂತೆ, ಇದರಲ್ಲಿ ಯಾವುದು ನಂತರವೋ, ಆ ದಿನಾಂಕದಿಂದ ಮಂಜೂರು ಮಾಡಿ ಆದೇಶ ಹೊರಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 2012 (viii) ಬೆಂಗಳೂರು ದಿನಾಂಕ : 14ನೇ ಜೂನ್ 2012ರ ಆದೇಶವನ್ನು ರಾಜ್ಯ ಸರ್ಕಾರದಿಂದ ವೇತನಾನುದಾನ ಪಡೆಯುತ್ತಿರುವ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆ, ಪದವಿ ಪೂರ್ವ ಶಿಕ್ಷಣ ಇಲಾಖೆ ಮತ್ತು ಇತರೇ ಅನುದಾನಿತ ಶಿಕ್ಷಣ ಸಂಸ್ಥೆಗಳ ಬೋಧಕ ಮತ್ತು ಬೋಧಕೇತರ ನೌಕರರಿಗೆ ವಿಸ್ತರಿಸಿರುವಂತೆ, ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಅನುದಾನಿತ ಪಾಲಿಟೆಕ್ನಿಕ್‌ಗಳು ಮತ್ತು ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಒಂದೂ ಪದೋನ್ನತಿ ಇಲ್ಲದೆ 25 ಮತ್ತು 30 ವರ್ಷಗಳು ಒಂದೇ ಹುದ್ದೆಯಲ್ಲಿ ರಾಜ್ಯ ವೇತನ ಶ್ರೇಣಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳಿಗೂ ಸಹ ವಿಸ್ತರಿಸುವ ಬಗ್ಗೆ ಸರ್ಕಾರದ ಸೂಕ್ತ ಆದೇಶ ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯಂತೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಇಡಿ 71 ಡಿಟಿಇ 2013, ಬೆಂಗಳೂರು, ದಿನಾಂಕ : 06ನೇ ಜುಲೈ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರದ ವೇತನಾನುದಾನ ಪಡೆಯುವ ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಅನುದಾನಿತ ಪಾಲಿಟೆಕ್ನಿಕ್‌ಗಳು ಮತ್ತು ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ನೌಕರರಿಗೆ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 2012 (viii) ಬೆಂಗಳೂರು ದಿನಾಂಕ : 14ನೇ ಜೂನ್ 2012ರಲ್ಲಿ ಹೊರಡಿಸಲಾಗಿರುವ ನಿಬಂಧನೆ ಹಾಗೂ ಷರತ್ತುಗಳಿಗೊಳಪಟ್ಟು ಹಾಗೂ ಸದರಿ ಆದೇಶದ ಕಂಡಿಕೆ 6(ii) ರಲ್ಲಿ ನಮೂದಿಸಲಾಗಿರುವ ನೌಕರರನ್ನು ಹೊರತುಪಡಿಸಿ, ರಾಜ್ಯ ವೇತನ ಶ್ರೇಣಿಗಳಲ್ಲಿನ ಮೊದಲ 15 ಶ್ರೇಣಿಗಳಲ್ಲಿರುವ ಯಾವುದೇ ಒಂದು ಹುದ್ದೆಯಲ್ಲಿ ಇಪ್ಪತ್ತೈದು ಹಾಗೂ ಮೂವತ್ತು ವರ್ಷಗಳ ಕಾಲ ಒಂದೂ ಪದೋನ್ನತಿ ಪಡೆಯದೆ ಮುಂದುವರೆದಿರುವ ಅಥವಾ ಮುಂದುವರೆಯುವ ಸರ್ಕಾರಿ ನೌಕರನಿಗೆ ಆ ಹುದ್ದೆಗೆ ನಿಗದಿಪಡಿಸಲಾದ ವೇತನ ಶ್ರೇಣಿಯಲ್ಲಿ ಅಥವಾ ಅವರು ಹೊಂದಿರುವ ಆಯ್ಕೆ ಕಾಲಿಕ ವೇತನ ಶ್ರೇಣಿಯಲ್ಲಿ ಅಥವಾ ಹಿರಿಯ ವೇತನ ಶ್ರೇಣಿಯಲ್ಲಿ ಆಯಾ ಪ್ರಕರಣಕ್ಕನ್ವಯ ಕ್ರಮವಾಗಿ 2ನೇ ಹೆಚ್ಚುವರಿ ವೇತನ ಬಡ್ತಿಯನ್ನು ಅಥವಾ 3ನೇ ಹೆಚ್ಚುವರಿ ವೇತನ ಬಡ್ತಿಯನ್ನು ದಿನಾಂಕ : 1ನೇ ಏಪ್ರಿಲ್ 2012 ರಿಂದ ಜಾರಿಗೆ ಬರುವಂತೆ ಅಥವಾ 25 ಮತ್ತು 30 ವರ್ಷಗಳ ಸೇವೆ ಪೂರ್ಣಗೊಳಿಸಿದ ದಿನಾಂಕದಿಂದ, ಇವುಗಳಲ್ಲಿ ಯಾವುದು ನಂತರವೋ, ಆ ದಿನಾಂಕದಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 221 ಎಸ್‌ಇಆರ್–2/2013, ದಿನಾಂಕ : 07–06–2013ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮನೋರಮಾ ಡಿ.ಸಿ.**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

**PR. 907**
**SC 50**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವಾಲಯ

### ಸುತ್ತೋಲೆ

**ಸಂಖ್ಯೆ : ಮಮಇ 11 ಮಅನಿ 2013, ಬೆಂಗಳೂರು, ದಿನಾಂಕ : 29–07–2013.**

**ವಿಷಯ:** ಲಿಂಗತ್ವ ಅಲ್ಪಸಂಖ್ಯಾತರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಸರ್ಕಾರವು ರೂಪಿಸಿರುವ ಯೋಜನಾ ಕಾರ್ಯಕ್ರಮಗಳ ಅನುಷ್ಠಾನದ–ಕುರಿತು.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ : ಮಮಇ 68 ಮಅನಿ 10, ದಿನಾಂಕ : 20–10–2010.
2. ವ್ಯವಸ್ಥಾಪಕ ನಿರ್ದೇಶಕರು, ಕ.ರಾ.ಮ.ಅ.ನಿ ಇವರ ಪತ್ರ ಸಂಖ್ಯೆ : ಮಅನಿ/ಲಿಂಅಸಂ–01/2010–11, ದಿನಾಂಕ : 10–08–2012.
3. ಸರ್ಕಾರದ ಅರೆ ಸರ್ಕಾರಿ ಪತ್ರ ಸಂಖ್ಯೆ : ಮಮಇ 11 ರಾಮಅ 13, ದಿನಾಂಕ: 08–02–2013

ರಾಜ್ಯದಲ್ಲಿರುವ ಲಿಂಗತ್ವ ಅಲ್ಪಸಂಖ್ಯಾತರನ್ನು ಸಮಾಜದ ಮುಖ್ಯವಾಹಿನಿಗೆ ತರುವ ನಿಟ್ಟಿನಲ್ಲಿ ಸರ್ಕಾರವು ಅವರುಗಳಿಗಾಗಿ ಮೂಲಭೂತ ಸೌಕರ್ಯಗಳಾದ ವಸತಿ, ಬಿ.ಪಿ.ಎಲ್ ಕಾರ್ಡ್, 2 ಎ–ಗುಂಪಿಗೆ ಸೇರಿಸುವುದು, ಚುನಾವಣೆಯಲ್ಲಿ ಮತ ಚಲಾಯಿಸುವ ಹಕ್ಕು ಆರೋಗ್ಯ, ಉನ್ನತ ಶಿಕ್ಷಣ, ಪಿಂಚಣಿ, ವೃತ್ತಿ ತರಬೇತಿ ಸೌಲಭ್ಯಗಳನ್ನು ಒದಗಿಸಲು ಮೇಲೆ ಓದಲಾದ ಉಲ್ಲೇಖ 1)ರ ಸರ್ಕಾರಿ ಆದೇಶದಲ್ಲಿ ಯೋಜನೆಯ ಮಾರ್ಗಸೂಚಿ ಆದೇಶವನ್ನು ಹೊರಡಿಸಲಾಗಿದ್ದು. ಈ ಯೋಜನೆಗಳ ಅನುಷ್ಠಾನದ ಉಸ್ತುವಾರಿಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯನ್ನು ನೋಡಲ್ ಇಲಾಖೆಯೆಂದು ಹಾಗೂ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವನ್ನು ಉಸ್ತುವಾರಿ ಸಂಸ್ಥೆಯೆಂದು ನಿಯುಕ್ತಿಗೊಳಿಸಲಾಗಿರುತ್ತದೆ.

ಲಿಂಗತ್ವ ಅಲ್ಪಸಂಖ್ಯಾತರುಗಳ (ಹಿಜ್ರಾಗಳು, ಕೋಥಿಗಳು, ಜೋಗಪ್ಪಂದಿರು/ಎಫ್ ಟು ಎಂ/ಎಂ ಟು ಎಫ್/ ಮಂಗಳಮುಖಿಯರು/ ಕಲ್ಯಾಣಕ್ಕಾಗಿ ಉದ್ದೇಶಿಸಿರುವ ಯೋಜನೆಗಳ ಸೌಲಭ್ಯವನ್ನು ಫಲಾನುಭವಿಗಳಿಗೆ ತಲುಪಿಸಲು ಸರ್ಕಾರದ ಎಲ್ಲಾ ಇಲಾಖಾ ಮುಖ್ಯಸ್ಥರುಗಳಿಗೆ ಹಾಗೂ ಜಿಲ್ಲೆಯ ಮುಖ್ಯಸ್ಥರುಗಳಿಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವತಿಯಿಂದ ಉಲ್ಲೇಖ 2)ರಲ್ಲಿ ಅರೆ ಸರ್ಕಾರಿ ಪತ್ರ ಹೊರಡಿಸಲಾಗಿದೆ.

ಲಿಂಗತ್ವ ಅಲ್ಪಸಂಖ್ಯಾತರಗಳನ್ನು ಆರೋಗ್ಯ ಕುಟುಂಬ ಕಲ್ಯಾಣ ಇಲಾಖೆಯಿಂದ ಲಿಂಗತ್ವ ದೃಢೀಕರಣ ಪ್ರಮಾಣ ಪತ್ರವನ್ನು ಇವರುಗಳು ಎದುರಿಸಬಹುದಾದ ತೊಂದರೆಗಳನ್ನು ನಿವಾರಿಸಲು "ಲಿಂಗತ್ವ ಅಲ್ಪಸಂಖ್ಯಾತರುಗಳು "ನಿರ್ವಾಣ್" ಆಗಿದ್ದಲ್ಲಿ ಮಾತ್ರ ಲಿಂಗತ್ವವನ್ನು ಗುರುತಿಸಲು ಸಾಧ್ಯವೆಂದು

ಹಾಗೂ ವೈದ್ಯರು ಸಹ ಪ್ರಮಾಣ ಪತ್ರ ನೀಡಲು ಸಹಕಾರಿಯಾಗುತ್ತದೆ. ಆದರೆ, "ನಿರ್ವಾಣ್" ಆಗದವರಿಗೆ ವೈದ್ಯಕೀಯ ಪ್ರಮಾಣ ಪತ್ರ ನೀಡಲು ಸಾಧ್ಯವಾಗುತ್ತಿಲ್ಲವೆಂಬುದನ್ನು ಸರ್ಕಾರವು ಮನಗಂಡು, ಲಿಂಗತ್ವ ಅಲ್ಪಸಂಖ್ಯಾತರೆಲ್ಲರಿಗೂ ಸಮಾನ ದೃಷ್ಟಿಯಿಂದ ಸರ್ಕಾರದ ಸವಲತ್ತು ದಕ್ಕಿಸುವಂತಾಗಲು ಸಮುದಾಯ ಆಧಾರಿತ ಸಂಸ್ಥೆಗಳಾದ "ಸಂಗಮ" ಮತ್ತು "ಕೆ.ಎಸ್.ಎಂ.ಎಫ್" ಸಂಸ್ಥೆಗಳು ನೋಂದಾಯಿತ ಸದಸ್ಯತ್ವವನ್ನು ಅಫಿಡೆವಿಟ್ ಮೂಲಕ ಪ್ರಮಾಣೀಕರಿಸಿ ಗುರುತಿಸಿಕೊಳ್ಳತಕ್ಕದ್ದು.

ಅಫಿಡೆವಿಟ್‌ನ ಪ್ರಮಾಣ ಪತ್ರದ ಆಧಾರದ ಮೇಲೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆಯು ಎಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಲಿಂಗತ್ವ ಅಲ್ಪಸಂಖ್ಯಾತರುಗಳಿಗೆ ಪ್ರತ್ಯೇಕವಾದ ವೈದ್ಯಕೀಯ ಸೌಲಭ್ಯ ಹಾಗೂ ಚಿಕಿತ್ಸೆಗಾಗಿ 2 ಪ್ರತ್ಯೇಕ ಹಾಸಿಗೆಗಳ ಕೊಠಡಿಯನ್ನು ಕಾಯ್ದಿರಿಸತಕ್ಕದ್ದು.

**ರಮೇಶ್ ಬಿ. ಝಳಕಿ**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲ ಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ.

**PR 911**
**SC 500**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಜಿಲ್ಲಾ ಪಂಚಾಯತ್ ಯೋಜನಾ ಘಟಕದಲ್ಲಿರುವ ಯೋಜನೇತರ ತಾತ್ಕಾಲಿಕ ಹುದ್ದೆಗಳನ್ನು 2013–14ನೇ ಸಾಲಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಯೋಇ 08 ಸಸಪ್ರ 2012, ದಿನಾಂಕ : 21–08–2012.
2. ಸರ್ಕಾರದ ಆದೇಶ ಸಂಖ್ಯೆ : ಪಿಡಿ 102 ಎಸ್‌ಎಂಸಿ 2006, ದಿನಾಂಕ : 11–06–2007.
3. ಸರ್ಕಾರದ ಆದೇಶ ಸಂಖ್ಯೆ : ಪಿಡಿ 15 ಎಸ್.ಎಂ.ಸಿ. 2010, ದಿನಾಂಕ : 22–11–2010.
4. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಮಂಡ್ಯ, ಬೆಂಗಳೂರು (ನಗರ), ಬೆಂಗಳೂರು (ಗ್ರಾಮಾಂತರ), ಚಿತ್ರದುರ್ಗ, ಶಿವಮೊಗ್ಗ, ತುಮಕೂರು, ಕೋಲಾರ, ದಕ್ಷಿಣ ಕನ್ನಡ, ಕೊಡಗು, ಮೈಸೂರು, ಹಾಸನ, ಬೀದರ್, ರಾಯಚೂರು, ವಿಜಾಪುರ, ಧಾರವಾಡ, ಚಾಮರಾಜನಗರ, ಬಾಗಲಕೋಟೆ, ಉಡುಪಿ, ಗದಗ, ದಾವಣಗೆರೆ, ಹಾವೇರಿ, ಗುಲ್ಬರ್ಗಾ, ಉತ್ತರ ಕನ್ನಡ, ರಾಮನಗರ ಜಿಲ್ಲೆಗಳು ಇವರುಗಳಿಂದ ಬಂದಿರುವ ಪ್ರಸ್ತಾವನೆಗಳು.

**ಪ್ರಸ್ತಾವನೆ :**

ಕ್ರ.ಸಂ. (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಜಿಲ್ಲಾ ಪಂಚಾಯತ್‌ಗಳ ಯೋಜನಾ ಘಟಕದಲ್ಲಿರುವ ಒಟ್ಟು 397 ಯೋಜನೇತರ ಹುದ್ದೆಗಳನ್ನು 2012–13ನೇ ಸಾಲಿಗೆ ಅಂದರೆ ದಿನಾಂಕ : 01–04–2012 ರಿಂದ 31–03–2013 ರವರೆಗೆ ಮುಂದುವರೆಸಲಾಗಿದೆ.

ಕ್ರ.ಸಂ. (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 64 ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸಲಾಗಿದೆ ಮತ್ತು ಕ್ರ.ಸಂ. (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿ ಎರಡನೇ ಹಂತವಾಗಿ 43 ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸಲಾಗಿದೆ. ಈ ಎಲ್ಲಾ 107 ತಾಲ್ಲೂಕು ಯೋಜನಾ ಘಟಕಗಳಲ್ಲಿನ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗುತ್ತಿದೆ.

| | | | |
|---|---|---|---|
| 1. | ಮುಖ್ಯ ಯೋಜನಾಧಿಕಾರಿಗಳು | – | 30 |
| 2. | ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನ ಅಧಿಕಾರಿಗಳು | – | 30 |
| 3. | ತಾಲ್ಲೂಕು ಯೋಜನಾಧಿಕಾರಿಗಳು | – | 107 |
| 4. | ಯೋಜನಾ ಸಹಾಯಕರು (ಆರ್ಥಿಕ) | – | 27 |
| 5. | ಯೋಜನಾ ಸಹಾಯಕರು (ಸಾಂಖ್ಯಿಕ) | – | 25 |
| 6. | ಪ್ರಥಮ ದರ್ಜೆ ಸಹಾಯಕರು | – | 28 |
| 7. | ದ್ವಿತೀಯ ದರ್ಜೆ ಸಹಾಯಕರು | – | 37 |
| 8. | ಶೀಘ್ರಲಿಪಿಗಾರರು | – | 29 |
| 9. | ಬೆರಳಚ್ಚುಗಾರರು | – | 32 |
| 10. | ದಲಾಯತ್ | – | 52 |
| | **ಒಟ್ಟು** | – | **397** |

ತಾಲ್ಲೂಕು ಯೋಜನಾ ಘಟಕಗಳ ಹುದ್ದೆಗಳು ಯೋಜನಾ ಇಲಾಖೆಯ ಆಡಳಿತಾತ್ಮಕ ವ್ಯಾಪ್ತಿಗೆ ಒಳಪಟ್ಟಿರುತ್ತವೆ. ಈ ತಾಲ್ಲೂಕು ಯೋಜನಾ ಘಟಕಗಳು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಸಂಪೂರ್ಣ ಆಡಳಿತ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸುತ್ತಿವೆ.

ಕ್ರ.ಸಂ. (4)ರಲ್ಲಿ ಓದಲಾದ ಪತ್ರಗಳಲ್ಲಿ ನಮೂದಿಸಿರುವ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣ ಅಧಿಕಾರಿಗಳು, ಯೋಜನಾ ಘಟಕಗಳ ಯೋಜನೇತರ ಹುದ್ದೆಗಳನ್ನು ದಿನಾಂಕ : 01–04–2013 ರಿಂದ 31–03–2014ರವರೆಗೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶ ಹೊರಡಿಸಲು ಸರ್ಕಾರವನ್ನು ಕೋರಿರುತ್ತಾರೆ.

ರಾಜ್ಯದ ಎಲ್ಲಾ 30 ಜಿಲ್ಲೆಗಳ ಯೋಜನಾ ಘಟಕಗಳಿಗೆ ಮಂಜೂರಾದ ಯೋಜನೇತರ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಬೇಕಾಗಿರುವ ಅಗತ್ಯತೆಯನ್ನು ಮನಗಂಡು 2013–14ನೇ ಸಾಲಿಗೆ ಅಂದರೆ ದಿನಾಂಕ : 1–4–2013 ರಿಂದ 31–3–2014ರವರೆಗೆ (ಎ.ದಿ.ಸೇ) ಸಾರ್ವಜನಿಕ ಹಿತದೃಷ್ಟಿಯಿಂದ ಮುಂದುವರೆಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 03 ಸಸಪ್ರ 2013, ಬೆಂಗಳೂರು, ದಿನಾಂಕ : 03–09–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಆದೇಶದ ಅನುಬಂಧದಲ್ಲಿ ತೋರಿಸಿರುವ ರಾಜ್ಯದ 30 ಜಿಲ್ಲಾ ಪಂಚಾಯತ್‌ಗಳ ಯೋಜನಾ ಘಟಕದಲ್ಲಿರುವ ಈ ಕೆಳಕಂಡ 397 ಯೋಜನೇತರ ತಾತ್ಕಾಲಿಕ ಹುದ್ದೆಗಳನ್ನು 2013–14ನೇ ಸಾಲಿಗೆ ಅಂದರೆ ದಿನಾಂಕ : 01–04–2013 ರಿಂದ 31–03–2014ರವರೆಗೆ (ಎ.ದಿ.ಸೇ) ಸಾರ್ವಜನಿಕ ಹಿತದೃಷ್ಟಿಯಿಂದ ಮುಂದುವರೆಸಲು ಸರ್ಕಾರವು ಮಂಜೂರಾತಿ ನೀಡಿದೆ.

| | | | |
|---|---|---|---|
| 1. | ಮುಖ್ಯ ಯೋಜನಾಧಿಕಾರಿಗಳು | – | 30 |
| 2. | ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನ ಅಧಿಕಾರಿಗಳು | – | 30 |
| 3. | ತಾಲ್ಲೂಕು ಯೋಜನಾಧಿಕಾರಿಗಳು | – | 107 |
| 4. | ಯೋಜನಾ ಸಹಾಯಕರು (ಆರ್ಥಿಕ) | – | 27 |
| 5. | ಯೋಜನಾ ಸಹಾಯಕರು (ಸಾಂಖ್ಯಿಕ) | – | 25 |
| 6. | ಪ್ರಥಮ ದರ್ಜೆ ಸಹಾಯಕರು | – | 28 |
| 7. | ದ್ವಿತೀಯ ದರ್ಜೆ ಸಹಾಯಕರು | – | 37 |
| 8. | ಶೀಘ್ರಲಿಪಿಗಾರರು | – | 29 |
| 9. | ಬೆರಳಚ್ಚುಗಾರರು | – | 32 |
| 10. | ದಲಾಯತ್ | – | 52 |
| | **ಒಟ್ಟು** | – | **397** |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಪ್ರಸ್ತುತ ಸಾಲಿನ ಲೆಕ್ಕ ಶೀರ್ಷಿಕೆ 3451–00–101–0–26 ಜಿಲ್ಲಾ ಪಂಚಾಯತ್ (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಆಇ 01 ಟಿಎಫ್‌ಪಿ 96, ದಿನಾಂಕ :10–07–1996 ರಲ್ಲಿ ಆಡಳಿತ ಇಲಾಖೆಯು ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ತಿಪ್ಪೇಸ್ವಾಮಿ**
ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ),
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 03 ಸಸಪ್ರ 2013, ಬೆಂಗಳೂರು, ದಿನಾಂಕ : 03–09–2013ರ ಅನುಬಂಧ**

| ಕ್ರ. ಸಂ. | ಜಿಲ್ಲೆಗಳು | ಮುಖ್ಯ ಯೋಜನಾ ಅಧಿಕಾರಿ | ಪಿಎಇಒ | ತಾಲ್ಲೂಕು ಯೋಜನಾ ಧಿಕಾರಗಳು | ಯೋಜನಾ ಸಹಾಯಕರು, (ಆರ್ಥಿಕ) | ಯೋಜನಾ ಸಹಾಯಕರು (ಸಾಂಖ್ಯಿಕ) | ಪ್ರ.ದ.ಸ. | ದ್ವಿ.ದ.ಸ. | ಶೀಘ್ರಲಿಪಿಗಾರರು | ಬೆರಳಚ್ಚು ಗಾರರು | ದಲಾಯತ್ |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1 | ಬೆಂಗಳೂರು (ನಗರ) | 1 | 1 | 1 | 1 | 1 | – | 1 | 1 | 1 | 1 |
| 2 | ಬೆಂಗಳೂರು (ಗ್ರಾ) | 1 | 1 | 1 | 1 | 1 | 1 | 3 | 1 | 1 | 2 |
| 3 | ಚಿತ್ರದುರ್ಗ | 1 | 1 | 5 | 1 | 1 | 1 | 2 | 1 | 1 | 3 |
| 4 | ಶಿವಮೊಗ್ಗ | 1 | 1 | 2 | 1 | 1 | 1 | 2 | 1 | 1 | 3 |
| 5 | ತುಮಕೂರು | 1 | 1 | 8 | 1 | 1 | 1 | 1 | 1 | 1 | 2 |
| 6 | ಕೋಲಾರ | 1 | 1 | 3 | 1 | 1 | 1 | 1 | 1 | 1 | 2 |
| 7 | ಚಿಕ್ಕಮಗಳೂರು | 1 | 1 | 2 | 1 | 1 | 1 | 2 | 1 | 1 | 3 |
| 8 | ದಕ್ಷಿಣ ಕನ್ನಡ | 1 | 1 | 1 | 1 | 1 | 1 | 1 | 1 | 1 | 1 |
| 9 | ಕೊಡಗು | 1 | 1 | 2 | 1 | 1 | 1 | 1 | 1 | 1 | 2 |
| 10 | ಮೈಸೂರು | 1 | 1 | 4 | 1 | 1 | 1 | 2 | 1 | 1 | 3 |
| 11 | ಹಾಸನ | 1 | 1 | 3 | 1 | 1 | 1 | 2 | 1 | 2 | 3 |
| 12 | ಮಂಡ್ಯ | 1 | 1 | 3 | 1 | 1 | 1 | 2 | 1 | 1 | 2 |
| 13 | ಗುಲ್ಬರ್ಗಾ | 1 | 1 | 7 | 1 | 1 | 1 | 2 | 1 | 2 | 3 |

| ಕ್ರ. ಸಂ. | ಜಿಲ್ಲೆಗಳು | ಮುಖ್ಯ ಯೋಜನಾ ಅಧಿಕಾರಿ | ಪಿಎಇಓ | ತಾಲ್ಲೂಕು ಯೋಜನಾ ಧಿಕಾರಗಳು | ಯೋಜನಾ ಸಹಾಯಕರು, (ಆರ್ಥಿಕ) | ಯೋಜನಾ ಸಹಾಯಕರು (ಸಾಂಖ್ಯಿಕ) | ಪ್ರ.ದ.ಸ. | ದ್ವಿ.ದ.ಸ. | ಶೀಘ್ರಲಿಪಿಗಾರರು | ಬೆರಳಚ್ಚುಗಾರರು | ದಲಾಯತ್ |
|---|---|---|---|---|---|---|---|---|---|---|---|
| 14 | ಬೀದರ್ | 1 | 1 | 4 | 1 | 1 | 1 | 3 | 1 | 2 | 2 |
| 15 | ಬಳ್ಳಾರಿ | 1 | 1 | 5 | 1 | 1 | 1 | 1 | 1 | 1 | 2 |
| 16 | ರಾಯಚೂರು | 1 | 1 | 5 | 1 | 1 | 1 | – | – | 1 | 1 |
| 17 | ಬೆಳಗಾವಿ | 1 | 1 | 7 | 1 | 1 | 1 | 2 | 1 | 2 | 2 |
| 18 | ಬಿಜಾಪುರ | 1 | 1 | 5 | 1 | 1 | 1 | 1 | 1 | 1 | 1 |
| 19 | ಉತ್ತರ ಕನ್ನಡ | 1 | 1 | 4 | 1 | 1 | 1 | 1 | 1 | 1 | 3 |
| 20 | ಧಾರವಾಡ | 1 | 1 | 3 | 1 | 1 | 1 | 1 | 1 | 1 | 2 |
| 21 | ಚಾಮರಾಜನಗರ | 1 | 1 | 3 | 1 | 1 | 1 | 1 | 1 | 1 | 1 |
| 22 | ಬಾಗಲಕೋಟೆ | 1 | 1 | 3 | 1 | 1 | 1 | 1 | 1 | 1 | 1 |
| 23 | ಕೊಪ್ಪಳ | 1 | 1 | 4 | 1 | – | 1 | – | 1 | 1 | 1 |
| 24 | ದಾವಣಗೆರೆ | 1 | 1 | 4 | – | 1 | 1 | – | 1 | 1 | 1 |
| 25 | ಉಡುಪಿ | 1 | 1 | 1 | 1 | – | 1 | – | 1 | 1 | 1 |
| 26 | ಹಾವೇರಿ | 1 | 1 | 6 | 1 | – | 1 | – | 1 | 1 | 1 |
| 27 | ಗದಗ | 1 | 1 | 3 | 1 | – | 1 | – | 1 | 1 | 1 |
| 28 | ರಾಮನಗರ | 1 | 1 | 2 | – | 1 | 1 | 3 | 2 | – | 1 |
| 29 | ಯಾದಗಿರಿ | 1 | 1 | 3 | 1 | 1 | 1 | 1 | 1 | 1 | 1 |
| 30 | ಚಿಕ್ಕಬಳ್ಳಾಪುರ | 1 | 1 | 3 | – | – | – | – | – | – | – |
| | ಒಟ್ಟು | 30 | 30 | 107 | 27 | 25 | 28 | 37 | 29 | 32 | 52 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ತಿಪ್ಪೇಸ್ವಾಮಿ**
ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ),
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**PR 915**

## HEALTH AND FAMILY WELFARE SECRETARIAT

### ADDENDUM

**NO. HWF 164 IMM 2013, BANGALORE, DATED : 22-08-2013.**

In the Government Order No. HFW 164 IMM 2013 dated 03-08-2013 after the sentence, “Drugs (Prices Control) Order, 2013” appearing in the order portion, the sentence “an order issued under Section 3 of the Essential Commodities Act, 1955 (Central Act 10 of 1955)” shall be read as inserted and in Sl. No. 13 and 14 of column (3) after sub Sl. No. “5) Yadagiri District”. Shall be read as inserted.

By order and in the name of the Governor of Karnataka
**K.N. HARINIYAMMA**
Under Secretary to Government,
Health and Family Welfare Department
(IMD and Co-Ordination).

**PR – 916**

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ನಅಇ 244 ಬೆಂರೂಪ್ರಾ 2011, ಬೆಂಗಳೂರು, ದಿನಾಂಕ : 26–11–2012.**

ದಾವಣಗೆರೆ–ಹರಿಹರ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕೃತ–1) ಸರ್ಕಾರದ ಆದೇಶ ಸಂಖ್ಯೆ : ನಅಇ 81 ಬೆಂರೂಪ್ರಾ 2008, ಬೆಂಗಳೂರು ದಿನಾಂಕ : 26–07–2008ರಲ್ಲಿ ಅಂತಿಮ ಅನುಮೋದನೆ ನೀಡಲಾಗಿರುವ ಆದೇಶದಲ್ಲಿ ವಿಧಿಸಿರುವ 1ನೇ ನಿಬಂಧನೆಯನ್ನು ಕೈಬಿಡಲಾಗಿದೆ. ಬದಲಿಗೆ ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

(1). "ಕುಂದವಾಡ ಕೆರೆಯ ಸಂಗ್ರಹಿತ ನೀರನ್ನು ನಗರದ ಸಾರ್ವಜನಿಕರು ಕುಡಿಯುವ ನೀರಿಗಾಗಿ ಬಳಸುತ್ತಿರುವ ಹಿನ್ನೆಲೆಯಲ್ಲಿ ದಾವಣಗೆರೆ ತಾಲ್ಲೂಕಿನ ಶ್ಯಾಬನೂರು ಗ್ರಾಮದ ರಿ.ಸ.ನಂ. 14 ರಿಂದ 20 ರ ವರೆಗಿನ ಜಮೀನುಗಳನ್ನು ವಸತಿಗಾಗಿ ಕಾಯ್ದಿರಿಸಿ ಕೆರೆಗೆ ಯಾವುದೇ ಧಕ್ಕೆಯಾಗದ ರೀತಿ ಅಥವಾ ಕಲುಷಿತಗೊಳ್ಳಲು ಅವಕಾಶವಿಲ್ಲದೇ ಇರುವ ರೀತಿ ಸಂರಕ್ಷಿಸಲು ಪ್ರಾಧಿಕಾರದ ಹಂತದಲ್ಲಿ ತಕ್ಕ ಯೋಜನೆಯನ್ನು ರೂಪಿಸಿಕೊಳ್ಳತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**PR 919**
**SC 100**

## ಕಂದಾಯ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು ಕಸಬಾ ಹೋಬಳಿ, ತುಮಕೂರು ಗ್ರಾಮದ ಸ.ನಂ. 33 ರಲ್ಲಿನ ಜಮೀನನ್ನು ವಿವಿಧ ಸಾರ್ವಜನಿಕ ಉದ್ದೇಶಗಳಿಗೆ ಬಳಸಿಕೊಳ್ಳಲು ಶ್ರೀ ಸಿದ್ದಗಂಗಾ ಮಠದ ವಿದ್ಯಾಸಂಸ್ಥೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ/ಸಿಆರ್–18/ 2012–12, ದಿನಾಂಕ 16–06–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪ್ರಸ್ತಾವನೆಯಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು ತುಮಕೂರು ಗ್ರಾಮದ ಸ.ನಂ. 33ರಲ್ಲಿ 9–09 ಎಕರೆ ಜಮೀನನ್ನು ಶ್ರೀ ಸಿದ್ದಗಂಗಾ ಪ್ರೌಢಶಾಲೆಗೆ ಆಟದ ಮೈದಾನಕ್ಕಾಗಿ ಸರ್ಕಾರದ ಆದೇಶ ಸಂಖ್ಯೆ : 7177–80/ಎಲ್‌ಆರ್: 33–46–15 ದಿನಾಂಕ 11–02–1947 ರಂದು ಮಂಜೂರು ಮಾಡಿರುವುದನ್ನು ಸದರಿ ಸಂಸ್ಥೆಯವರು ವಿವಿಧ ಸಾರ್ವಜನಿಕ ಉದ್ದೇಶಗಳಿಗೆ ಬಳಸಿಕೊಳ್ಳಲು ಅನುಮತಿ ನೀಡುವ ಬಗ್ಗೆ ವರದಿ ಸಲ್ಲಿಸಿರುತ್ತಾರೆ.

2. ಪ್ರಾದೇಶಿಕ ಆಯುಕ್ತರ ವರದಿಯನ್ನು ಪರಿಶೀಲಿಸಲಾಗಿ, ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ತುಮಕೂರು ಗ್ರಾಮದ ಸ.ನಂ.33 ರಲ್ಲಿ 9–09 ಎಕರೆ ಜಮೀನನ್ನು ಶ್ರೀ ಸಿದ್ದಗಂಗಾ ಪ್ರೌಢಶಾಲೆಗೆ ಆಟದ ಮೈದಾನಕ್ಕಾಗಿ ಸರ್ಕಾರದ ಆದೇಶ ಸಂಖ್ಯೆ 7177–80/ಎಲ್‌ಆರ್: 33–46–15 ದಿನಾಂಕ 01–02–1947 ರಂದು ಮಂಜೂರು ಮಾಡಿದ್ದು, ಶ್ರೀ ಸಿದ್ದಗಂಗಾ ಮಠವು, ಶ್ರೀ ಸಿದ್ದಗಂಗಾ ವಿದ್ಯಾಸಂಸ್ಥೆ ಎಂಬ ಹೆಸರಿನಲ್ಲಿ ಸಾವಿರಾರು ಬಡ ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾಭ್ಯಾಸ ಉಚಿತ ವಸತಿ, ಉಚಿತ ಊಟ ಸೌಲಭ್ಯ ಕಲ್ಪಿಸಿರುವುದರಿಂದ ಈ ಆಟದ ಮೈದಾನದಲ್ಲಿ ಈ ಕೆಳಕಂಡ ಸಾರ್ವಜನಿಕ ಸೇವಾ ಉದ್ದೇಶಗಳಿಗಾಗಿ ಬಳಸಿಕೊಳ್ಳಲು ಸರ್ಕಾರದಿಂದ ಅನುಮತಿ ದೊರಕಿಸಿಕೊಡಬೇಕೆಂದು ಕೋರಿರುತ್ತಾರೆ.

ಎ–ಗುಂ

| | | |
|---|---|---|
| 1 | ಶ್ರೀ ಬಸವೇಶ್ವರ ಆಂಗ್ಲ ಪ್ರೌಢಶಾಲೆ | 0–26 |
| 2 | ಶ್ರೀ ಸಿದ್ದಗಂಗಾ ಔಷಧ ಮಹಾವಿದ್ಯಾಲಯ | 1–00 |
| 3 | ಉದ್ಯಾನವನ ಪ್ರದೇಶಕ್ಕೆ | 1–26 |
| 4 | ಬಿ.ಹೆಚ್. ರಸ್ತೆ | 0–24 |
| 5 | ಸೈಕಲ್ ಸ್ಟ್ಯಾಂಡ್ | 0–01 |
| 6 | ಆಟದ ಮೈದಾನ ಇರುವ ಪ್ರದೇಶ | 3–27 |
| | **ಒಟ್ಟು** | **7–24** |

### ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 13 ಎಲ್‌ಜಿಟಿ 2013, ಬೆಂಗಳೂರು, ದಿನಾಂಕ: 29–08–2013

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು ಕಸಬಾ ಹೋಬಳಿ, ತುಮಕೂರು ಗ್ರಾಮದ ಸ.ನಂ. 33ರಲ್ಲಿನ 9.09 ಎಕರೆ ಜಮೀನನ್ನು ಆಟದ ಮೈದಾನಕ್ಕೆಂದು ಷರತ್ತು ವಿಧಿಸಿ ಶ್ರೀ ಸಿದ್ದಗಂಗಾ ಪ್ರೌಢಶಾಲೆಗೆ ಮಂಜೂರು ನೀಡಲಾಗಿರುವುದನ್ನು ಸಡಿಲಿಸಿ ಕೆಳಕಂಡ ಸಾರ್ವಜನಿಕ ಸೇವಾ ಉದ್ದೇಶಗಳಿಗೆ ಉಪಯೋಗಿಸಿಕೊಳ್ಳಲು ಶ್ರೀ ಸಿದ್ದಗಂಗಾ ಮಠದ ವಿದ್ಯಾಸಂಸ್ಥೆಗೆ ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

ಎ–ಗುಂ

| | | |
|---|---|---|
| 1 | ಶ್ರೀ ಬಸವೇಶ್ವರ ಆಂಗ್ಲ ಪ್ರೌಢಶಾಲೆ | 0–26 |
| 2 | ಶ್ರೀ ಸಿದ್ದಗಂಗಾ ಔಷಧ ಮಹಾವಿದ್ಯಾಲಯ | 1–00 |

| | | |
|---|---|---|
| 3 | ಉದ್ಯಾನವನ ಪ್ರದೇಶಕ್ಕೆ | 1–26 |
| 4 | ಬಿ.ಹೆಚ್. ರಸ್ತೆ | 0–24 |
| 5 | ಸೈಕಲ್ ಸ್ಟ್ಯಾಂಡ್ | 0–01 |
| 6 | ಆಟದ ಮೈದಾನ ಇರುವ ಪ್ರದೇಶ | 3–27 |
| | **ಒಟ್ಟು** | **7–24** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಜೆ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.
(ಭೂ ಮಂಜೂರಾತಿ–3)

**PR. 930**
**SC. 25**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ.ಪಿ. ಚಂದ್ರಹಾಸ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಎಫ್‌ಇಇ 112 ಎಸಿಎಸ್ 2012, ದಿನಾಂಕ : 2–6–2012.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 06–06–2012.
3. ನೋಟೀಸ್ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 12–10–2012.
4. ಅಧಿಕಾರಿಯವರ ಮನವಿ ದಿನಾಂಕ : 30–10–2012.
5. ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 27–11–2012.
6. ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಅಪಜೀ 6 ಸಿಆರ್‌ಎಸ್ 2013, ದಿನಾಂಕ : 08–02–2013.
7. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 21–02–2013.
8. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 13–06–2013.
9. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ : 27–05–2013.
10. ಎರಡನೇ ಕಾರಣ ಕೇಳುವ ನೋಟೀಸ್ ದಿನಾಂಕ : 14–06–2013.
11. ಅಧಿಕಾರಿಯವರ ಮನವಿ ದಿನಾಂಕ : 04–07–2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಇವರ ಟಿಪ್ಪಣಿಯಲ್ಲಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಕೆ.ಪಿ. ಚಂದ್ರಹಾಸ ಇವರು ಕಡತ ಸಂಖ್ಯೆ ಎಫ್.ಇ.ಇ. 192 ಎಫ್.ಎಲ್.ಎಲ್ 2008ರಲ್ಲಿ ಸಚಿವ ಸಂಪುಟವು ಕೈಗೊಂಡ ನಿರ್ಣಯದ ಟಿಪ್ಪಣಿ ಸಂಖ್ಯೆ : ಸಿ–209/2012ರನ್ವಯ ಸರ್ಕಾರವು ಆದೇಶವನ್ನು ಹೊರಡಿಸುವ ಮುನ್ನ, ಸದರಿ ಸಚಿವ ಸಂಪುಟದ ಟಿಪ್ಪಣಿಯನ್ನು ಮಾಹಿತಿ ಹಕ್ಕು ಕಾಯಿದೆಯಡಿ ಖಾಸಗಿ ಸಂಸ್ಥೆಯೊಂದಕ್ಕೆ ನೀಡಿದ್ದು, ಇದರಿಂದಾಗಿ ಸದರಿ ಖಾಸಗಿ ಸಂಸ್ಥೆಯು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಚಿವ ಸಂಪುಟದ ತೀರ್ಮಾನಕ್ಕೆ ತಡೆಯಾಜ್ಞೆಯನ್ನು ತಂದಿರುತ್ತದೆಂದೂ, ಈ ರೀತಿ ಶ್ರೀ ಕೆ.ಪಿ. ಚಂದ್ರಹಾಸ, ಅಧೀನ ಕಾರ್ಯದರ್ಶಿ ಇವರು ಗುರುತರವಾದ ಆರೋಪ/ಕರ್ತವ್ಯಚ್ಯುತಿ ಎಸಗಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸುವಂತೆ ಕೋರಿದ್ದರ ಮೇರೆಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ) ರಡಿ ಸೇವೆಯಿಂದ ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (3)ರಲ್ಲಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಾವಳಿಯ ನಿಯಮ 11ರನ್ವಯ ನೋಟೀಸ್ ನೀಡಿ, ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಉದ್ದೇಶದಿಂದ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿ ಲಿಖಿತ ಹೇಳಿಕೆಯೇನಾದರೂ ಇದ್ದಲ್ಲಿ, ಸಲ್ಲಿಸುವಂತೆ ಸೂಚಿಸಲಾಗಿತ್ತು. ಮೇಲೆ (4)ರಲ್ಲಿ ಓದಲಾದ ಆರೋಪಿತ ಅಧಿಕಾರಿಯವರ ಮನವಿಯಲ್ಲಿ ಸದರಿ ದೋಷಾರೋಪಣಾ ಪಟ್ಟಿಗೆ ತಮ್ಮ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು. ಸದರಿ ಪ್ರತಿರಕ್ಷಣಾ ಹೇಳಿಕೆಯ ಬಗ್ಗೆ ಆಡಳಿತ ಇಲಾಖೆಯ ಅಭಿಪ್ರಾಯವನ್ನು ಮೇಲೆ (5)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಕೋರಲಾಗಿತ್ತು.

ಈ ಬಗ್ಗೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಮೇಲೆ (6)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆರೋಪಿತ ಅಧಿಕಾರಿಯವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ತಿಳಿಸಿರುವಂತೆ, ಮಾಹಿತಿಯನ್ನು ನೀಡಲು ನಿರಾಕರಿಸಿರುವ ಬಗ್ಗೆ ಯಾವುದೇ ಟಿಪ್ಪಣಿಗಳು ಹಾಗೂ ಮೌಖಿಕ ಚರ್ಚೆಗಳ

ಬಗ್ಗೆ ಯಾವುದೇ ಉಲ್ಲೇಖಗಳು ಕಡತದಲ್ಲಿ ಕಂಡು ಬರುತ್ತಿಲ್ಲವೆಂದೂ ಆದರೆ ಮಾಹಿತಿಯನ್ನು ನೀಡುವ ಬಗ್ಗೆ ಜಂಟಿ ಕಾರ್ಯದರ್ಶಿಯವರ ಅನುಮೋದನೆಯನ್ನು ಪಡೆದಿರುತ್ತಾರೆಂದು, ತಿಳಿಸಿರುತ್ತದೆ. ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿದ ಸರ್ಕಾರವು ಮೇಲೆ (7)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರೋಪಿತ ಅಧಿಕಾರಿಯವರ ವಿರುದ್ಧ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯವರನ್ನು ನೇಮಿಸಿ ಆದೇಶಿಸಿತ್ತು.

ಆರೋಪಿತ ಅಧಿಕಾರಿಯವರು ಅಮಾನತ್ತಿನಲ್ಲಿ ಆರು ತಿಂಗಳ ಅವಧಿಯನ್ನು ಕಳೆದುದರಿಂದ ಮೇಲೆ (8)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರೋಪಿತ ಅಧಿಕಾರಿಯವರ ವಿರುದ್ಧದ ಶಿಸ್ತಿನ ಕ್ರಮವನ್ನು ಬಾಕಿಯಿರಿಸಿ, ಅವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್‌ಸ್ಥಾಪಿಸಿ ಆದೇಶಿಸಲಾಗಿದೆ.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (9)ರಲ್ಲಿ ಓದಲಾದ ದಿನಾಂಕ : 27–5–2013ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು., ತಮ್ಮ ವರದಿಯಲ್ಲಿ ಆರೋಪಿತ ಅಧಿಕಾರಿಯವರಾದ ಶ್ರೀ ಕೆ.ಪಿ. ಚಂದ್ರಹಾಸ ಇವರು ಕರ್ತವ್ಯ ಶ್ರದ್ಧೆಯಿಂದ ಇರದೆ ಸರ್ಕಾರಿ ನೌಕರರಿಗೆ ಯೋಗ್ಯವಲ್ಲದ್ದನ್ನು ಮಾಡಿ, ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಗಳು 1966ರ ನಿಯಮ 3ನ್ನು ಉಲ್ಲಂಘಿಸಿರುವುದು ಸಾಬೀತಾಗಿದೆಯೆಂದು ನಿರ್ಣಯಿಸಿರುತ್ತಾರೆ.

ಮೇಲೆ (10)ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ಆರೋಪಿತ ಅಧಿಕಾರಿಯವರಿಗೆ ಜಾರಿಗೊಳಿಸಿ ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿಯ ಬಗ್ಗೆ ತಮ್ಮ ಹೇಳಿಕೆಯನ್ನು 15 ದಿವಸಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದರಂತೆ ಆರೋಪಿತ ಅಧಿಕಾರಿಯವರು ಮೇಲೆ ಓದಲಾದ (11)ರಲ್ಲಿ ತಮ್ಮ ಹೇಳಿಕೆಯನ್ನು ಸಲ್ಲಿಸಿ ಮಾಹಿತಿ ಹಕ್ಕು ಕಾಯಿದೆಯ ಸೆಕ್ಷನ್ 8(1)(ಐ)ರಲ್ಲಿ ಮಂತ್ರಿ ಪರಿಷತ್ತಿನ ನಿರ್ಣಯಗಳನ್ನು ಸರ್ಕಾರಿ ಆದೇಶವಾಗುವವರೆಗೆ ಬಹಿರಂಗ ಪಡಿಸಬಾರದೆಂದು ಎಲ್ಲಿಯೂ ಹೇಳಿಲ್ಲವಾದ್ದರಿಂದ ತಾವು ಮಾಹಿತಿ ಹಕ್ಕು ಕಾಯಿದೆಯ ಸೆಕ್ಷನ್ 8(1)(ಐ) ಅನ್ನು ಉಲ್ಲಂಘಿಸಿರುವುದಿಲ್ಲವೆಂದು ಹೇಳುವುದರೊಂದಿಗೆ ಈ ಬಗ್ಗೆ ಮೇಲಧಿಕಾರಿಗಳಾಗಲೀ ಅಥವಾ ಕೆಳವರ್ಗದ ಸಿಬ್ಬಂದಿಯಾಗಲೀ ತಮ್ಮ ಮಾರ್ಗದರ್ಶನ ನೀಡಿರುವುದಿಲ್ಲವೆಂದು ತಿಳಿಸುತ್ತಾ, ತಮ್ಮ ವಿರುದ್ಧದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದರೆ, ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 8(1)(ಐ)ರಲ್ಲಿ ಮಂತ್ರಿ ಮಂಡಲದ ನಿರ್ಣಯಗಳು, ಆ ನಿರ್ಣಯಗಳಿಗೆ ಕಾರಣಗಳು ಮತ್ತು ತೆಗೆದುಕೊಂಡ ನಿರ್ಣಯಗಳಿಗೆ ಆಧರಿಸಿದ ವಿಷಯ ಸಾಮಗ್ರಿ ಇವುಗಳನ್ನು ನಿರ್ಣಯವನ್ನು ತೆಗೆದುಕೊಂಡ ಮತ್ತು ಆ ವಿಷಯ ಪೂರ್ಣಗೊಂಡ ಅಥವಾ ಮುಕ್ತಾಯಗೊಂಡ ತರುವಾಯ ಸಾರ್ವಜನಿಕರಿಗೆ ತಿಳಿಯಪಡಿಸತಕ್ಕದ್ದೆಂದು ಇರುತ್ತದೆ. ಆದಾಗ್ಯೂ ಸಹ, ಸಾರ್ವಜನಿಕ ಮಾಹಿತಿ ಅಧಿಕಾರಿಯಾದ ಆರೋಪಿತ ಅಧಿಕಾರಿಯವರು ಖಾಸಗಿ ಸಂಸ್ಥೆಗೆ ಸಚಿವ ಸಂಪುಟ ಸಭೆಯ ಕೈಗೊಂಡ ನಿರ್ಣಯದ ಪ್ರತಿಯನ್ನು ಸರ್ಕಾರಿ ಆದೇಶವನ್ನು ಹೊರಡಿಸುವ ಮುನ್ನವೇ ಮಾಹಿತಿ ಹಕ್ಕು ಕಾಯಿದೆಯಡಿ ನೀಡಿರುವುದರ ಮೂಲಕ ಕರ್ತವ್ಯಚ್ಯುತಿ ಎಸಗಿರುವುದು ವಿಚಾರಣಾ ವರದಿಯಿಂದ ಸಾಬೀತಾಗಿರುತ್ತದೆ.

ಪ್ರಕರಣದಲ್ಲಿ ಒದಗಿ ಬಂದ ಸಂದರ್ಭ ಮತ್ತು ಸನ್ನಿವೇಶಗಳು, ಸಾಕ್ಷ್ಯಾಧಾರಗಳು ದಾಖಲೆಗಳನ್ನು ಮತ್ತು ವಿಚಾರಣಾ ವರದಿಯನ್ನು ಹಾಗೂ ವಿಚಾರಣಾ ವರದಿಯ ಬಗ್ಗೆ ಆರೋಪಿತ ಅಧಿಕಾರಿಯವರು ಸಲ್ಲಿಸಿರುವ ಹೇಳಿಕೆಗಳೆಲ್ಲವನ್ನೂ ಸಕ್ಷಮ ಶಿಸ್ತು ಪ್ರಾಧಿಕಾರವಾದ ಸರ್ಕಾರವು ಪರಿಶೀಲಿಸಿ ವಿಚಾರಣಾಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿಯನ್ನು ಅಂಗೀಕರಿಸಿ, ಶ್ರೀ ಕೆ.ಪಿ. ಚಂದ್ರಹಾಸ, ಅಧೀನ ಕಾರ್ಯದರ್ಶಿ ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುತ್ತದೆಯೆಂದು ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ನಿರ್ಣಯಿಸಿರುವುದರಿಂದ ಆರೋಪಿತ ಅಧಿಕಾರಿಗೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 8(iii)ರನ್ವಯ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆ ವಿಧಿಸುವುದು ಸಾಬೀತಾದ ಆರೋಪಕ್ಕೆ ತಕ್ಕ ದಂಡನೆಯೆಂದು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ಬೆಂಗಳೂರು, ದಿನಾಂಕ : 19ನೇ ಆಗಸ್ಟ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಪಿ ಚಂದ್ರಹಾಸ, ಅಧೀನ ಕಾರ್ಯದರ್ಶಿ, ಇವರು ಮಾಹಿತಿ ಹಕ್ಕು ಅಧಿನಿಯಮ 2005ರಡಿ ಸಚಿವ ಸಂಪುಟ ಸಭೆಯು ಕೈಗೊಂಡ ನಿರ್ಣಯದ ಪ್ರತಿಯನ್ನು ಸರ್ಕಾರದ ಆದೇಶವನ್ನು ಹೊರಡಿಸುವ ಮುನ್ನವೇ ಖಾಸಗಿ ಸಂಸ್ಥೆಗೆ ನೀಡಿ ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 8(1)(ಐ)ನ್ನು ಉಲ್ಲಂಘಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ ಇವರಿಗೆ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iii)ರನ್ವಯ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ಈ ತಕ್ಷಣದಿಂದ ಜಾರಿಗೆ ಬರುವಂತೆ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–6).

PR. 935

## PERSONNEL AND ADMINISTRATIVE REFORMS SECRETARIAT

### NOTIFICATION

**NO. DPAR 214 SAS 2013, Bangalore, dated : 17th July, 2013.**

Consequent upon revocation of suspension and reinstatement into service vide Government Order No. DPAR 214 SAS 2013, dated : 17-07-2013, the services of **Sri M.K. Aiyappa, IAS (KN-2002),** are placed at the disposal of Commerce and Industries

Department with immediate effect for being posted until further orders as **Managing Director, Mysore Sugar Company Limited, Bangalore** in the existing vacancy.

By Order and in the name of the Governor of Karnataka

**U.H. NARAYANASWAMY**

**P.R. 936**

Under Secretary to Government,

DP & AR (Services-I).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮುಖ್ಯ ಚುನಾವಣಾಧಿಕಾರಿಗಳ ಕಛೇರಿಯಲ್ಲಿನ ತಾತ್ಕಾಲಿಕವಾಗಿ ಉನ್ನತೀಕರಿಸಿರುವ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 286 ಸಅಸೇ 2012, ದಿನಾಂಕ : 28-06-2012.
2. ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಚುನಾವಣೆಗಳು), ಇವರ ಪತ್ರ ಸಂಖ್ಯೆ : ಸಿಆಸುಇ 45 ಚುಸಿಆ 2011, ದಿನಾಂಕ : 20-03-2013.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮುಖ್ಯ ಚುನಾವಣಾಧಿಕಾರಿ ಕಛೇರಿಯಲ್ಲಿನ ಶಾಖಾಧಿಕಾರಿ ಹುದ್ದೆಯನ್ನು ದಿನಾಂಕ : 17-04-2012 ರಿಂದ ಜಾರಿಗೆ ಬರುವಂತೆ ಸರ್ಕಾರದ ಅಧೀನ ಕಾರ್ಯದರ್ಶಿಯೆಂದು ಉನ್ನತೀಕರಿಸಿದ್ದು.ಟ ಸದರಿ ಉನ್ನತೀಕರಿಸಿದ ಹುದ್ದೆಯಲ್ಲಿ ಶ್ರೀ ಟಿ. ಬಸವೇಗೌಡ, ತಹಶೀಲ್ದಾರ್ ಗ್ರೇಡ್-1, ಕಂದಾಯ ಇಲಾಖೆ, ಇವರನ್ನು ನೇಮಿಸಿ ಆದೇಶಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಚುನಾವಣಾ ಕೆಲಸ ಕಾರ್ಯಗಳ ಸುಗಮ ನಿರ್ವಹಣೆಯ ಸಲುವಾಗಿ ಚುನಾವಣಾ ಕೆಲಸ ಕಾರ್ಯಗಳಲ್ಲಿ ಅನುಭವವಿರುವ ಸದರಿ ಅಧಿಕಾರಿಯವರ ಸೇವೆಯನ್ನು ನಿಯೋಜನೆಯ ಮೇಲೆ ಮುಂದುವರಿಸುವುದು ಅತ್ಯವಶ್ಯಕವಾಗಿದ್ದು, ಈ ಹುದ್ದೆಯ ನಿಯೋಜನೆಯ ಅವಧಿಯನ್ನು ದಿನಾಂಕ : 17-04-2013 ರಿಂದ 2 ವರ್ಷಗಳ ಅವಧಿಗೆ ಮುಂದುವರಿಸಿ, ಸದರಿ ಅಧಿಕಾರಿಯವರನ್ನು ಈ ಹುದ್ದೆಗೆ ನೇಮಿಸಿ ಆದೇಶ ಹೊರಡಿಸಲು ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 321 ಸಅಸೇ 2013, ಬೆಂಗಳೂರು, ದಿನಾಂಕ : 31ನೇ ಜುಲೈ, 2013.**

ಮುಖ್ಯ ಚುನಾವಣಾಧಿಕಾರಿ ಕಛೇರಿಯಲ್ಲಿನ ಶಾಖಾಧಿಕಾರಿ ಹುದ್ದೆಯನ್ನು ದಿನಾಂಕ : 17-04-2013 ರಿಂದ 16-04-2014 ರವರೆಗೆ ಸರ್ಕಾರದ ಅಧೀನ ಕಾರ್ಯದರ್ಶಿಯೆಂದು ಉನ್ನತೀಕರಿಸಿ ಮುಂದುವರಿಸಲಾಗಿದೆ. ಸದರಿ ಹುದ್ದೆಯಲ್ಲಿ ಶ್ರೀ ಟಿ. ಬಸವೇಗೌಡ, ತಹಶೀಲ್ದಾರ್ ಗ್ರೇಡ್-1, ಇವರನ್ನು ದಿನಾಂಕ : 17-04-2013 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಲಾಗಿದೆ. ಹಾಗೂ ಈ ರೀತಿ ಉನ್ನತೀಕರಿಸಿ ಮುಂದುವರಿಸಲಾದ ಹುದ್ದೆಯನ್ನು ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 527 ವೆಚ್ಚ-12/2013, ದಿನಾಂಕ : 02-07-2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

**PR. 937**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು-6).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಸರ್ಕಾರದ ಅಧೀನ ಕಾರ್ಯದರ್ಶಿ (ನಿವೃತ್ತ) ಇವರ ವಿರುದ್ಧದ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ನೇಮಿಸುವ ಬಗ್ಗೆ-ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಆದೇಶ ಸಂಖ್ಯೆ : ಸಿಆಸುಇ 17 ಸೇಇವಿ 2011, ದಿನಾಂಕ : 23-11-2012.
2. ಶ್ರೀ ಹೆಚ್.ಆರ್. ಸುಧೀರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಪತ್ರ ದಿನಾಂಕ : 1-7-2013.
3. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ-ರಾಜಕೀಯ ವಿಶ್ರಾಂತಿ ವೇತನ-1) ಇವರ ಕಡತ ಸಂಖ್ಯೆ : ಸಿಆಸುಇ 72 ಪಿಎಫ್‌ಜಿ 2013.

**ಪ್ರಸ್ತಾವನೆ :**

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಸರ್ಕಾರದ ಅಧೀನ ಕಾರ್ಯದರ್ಶಿ (ನಿವೃತ್ತ) ಇವರು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ-ರಾಜಕೀಯ ವಿಶ್ರಾಂತಿ ವೇತನ-1) ಇಲ್ಲಿ ಈ ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದಾಗ, ತಮ್ಮ ವ್ಯಾಪ್ತಿಗೆ ಬರುತ್ತಿದ್ದ ಶಾಖೆಗಳಿಗೆ ಸಂಬಂಧಿಸಿದ ಬಿ.ಸಿ ಮತ್ತು ಡಿ ವೃಂದದ 2100 ಕಡತಗಳನ್ನು ಸಾರ್ವತ್ರಿಕ ದಾಖಲೆಗಳ ವಿಭಾಗಕ್ಕೆ ರವಾನಿಸದೇ ಅವುಗಳನ್ನು ತಮ್ಮ ಹಂತದಲ್ಲಿಯೇ ನಾಶಪಡಿಸಿ ಸಚಿವಾಲಯ ಕೈಪಿಡಿಯ ಸೆಕ್ಷನ್ 244 ಹಾಗೂ 252ರ ಸೂಚನೆಗಳನ್ನು ಪಾಲಿಸದೇ ಕರ್ತವ್ಯಲೋಪ ಎಸಗಿರುವ ಆರೋಪಗಳಿಗೆ ಸಂಬಂಧಿಸಿದಂತೆ

ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮ 11(2) ಮತ್ತು 11(5)ಸಿ ಅನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಹೆಚ್.ಆರ್. ಸುಧೀರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ–ರಾಜಕೀಯ ವಿಶ್ರಾಂತಿ ವೇತನ–1) ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಹೆಚ್.ಆರ್. ಸುಧೀರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಮತ್ತು ವಿಚಾರಣಾಧಿಕಾರಿಗಳು ತಮ್ಮ ವೈಯಕ್ತಿಕ ತೊಂದರೆಗಳ ಕಾರಣದಿಂದಾಗಿ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ಕೋರಿರುವುದರಿಂದ, ಬದಲಿ ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ–ರಾಜಕೀಯ ವಿಶ್ರಾಂತಿ ವೇತನ–1) ಇವರು ಮೇಲೆ (3) ರಲ್ಲಿ ಓದಲಾದ ಕಡತದಲ್ಲಿ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 17 ಸೇಇವಿ 2011, ಬೆಂಗಳೂರು, ದಿನಾಂಕ : 29ನೇ ಜುಲೈ, 2013.**

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಸರ್ಕಾರದ ಅಧೀನ ಕಾರ್ಯದರ್ಶಿ (ನಿವೃತ್ತ) ಇವರು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ–ರಾಜಕೀಯ ವಿಶ್ರಾಂತಿ ವೇತನ–1) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಗೆ ಸಂಬಂಧಿಸಿದಂತೆ ಇವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ದಿನಾಂಕ : 23–11–2012ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರನ್ವಯ ಇಲಾಖಾ ವಿಚಾರಣೆ ನಡೆಸಲು ನಿಯಮ 11(2)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ವಿಚಾರಣಾಧಿಕಾರಿಯಾಗಿ ನೇಮಿಸಿದ್ದ ಶ್ರೀ ಹೆಚ್.ಆರ್. ಸುಧೀರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರ ಬದಲಿಗೆ ಶ್ರೀ ವಿ.ಪಿ. ಜಹಗೀರದಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯಾಗಿ ನೇಮಕ ಮಾಡಿ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 17 ಸೇಇವಿ 2011, ದಿನಾಂಕ : 23–11–2012ರ ಆದೇಶದಲ್ಲಿ ಮಂಡನಾಧಿಕಾರಿಯಾಗಿ ನೇಮಕ ಮಾಡಿದ್ದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ–ರಾಜಕೀಯ ವಿಶ್ರಾಂತಿ ವೇತನ) ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ತಿಳಿಸಲಾಗಿದೆ ಹಾಗೂ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯವರು ನಿಯಮಾನುಸಾರ ಸಂಚಿತ ಸಂಭಾವನೆಯನ್ನು ಮತ್ತು ಮಂಡನಾಧಿಕಾರಿಯವರು ನಿಯಮಾನುಸಾರ ದಿನ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–6).

**PR. 938**

## ಆರ್ಥಿಕ ಸಚಿವಾಲಯ

### ಸೇರ್ಪಡೆ

**ಸಂಖ್ಯೆ : ಆಇ 6 ಸೇನಿಸೇ 2013, ಬೆಂಗಳೂರು, ದಿನಾಂಕ : 04–09–2013.**

ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 19 ಎಸ್‌ಆರ್‌ಎಸ್ 88, ದಿನಾಂಕ : 25–05–1988 ರ ಅನುಬಂಧದ ಐಟಂ 8 ರಲ್ಲಿನ "ಸ್ವಗ್ರಾಮ ಪ್ರಯಾಣ ರಿಯಾಯಿತಿ ಸೌಲಭ್ಯ" ಪದಗಳ ನಂತರ "ಮತ್ತು ಭಾರತದಲ್ಲಿನ ಯಾವುದೇ ಸ್ಥಳಕ್ಕೆ ರಜಾ ಪ್ರಯಾಣ ರಿಯಾಯತಿ ಸೌಲಭ್ಯ" ಪದಗಳನ್ನು ಸೇರ್ಪಡೆಗೊಳಿಸಲಾಗಿದೆ ಎಂದು ಭಾವಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆಲಿಸ್ ಗೊನ್ಸಾಲ್ವಿಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–1).

## FINANCE SECRETARIAT

### ADDENDUM

**NO. FD 6 SRS 2013, Bangalore, dated : 04-09-2013.**

In item No. 8 of the Annexure to Government Order No. FD 19 SRS 88, dated : 25-05-1988, after the word "Home Travel Concession" the words "and Leave Travel Concession to any place in India" shall be deemed to have been added.

By Order and in the name of the Governor of Karnataka

**ALICE GONSALVES**

Under Secretary to Government,

Finance Department (Services-1).

**P.R. 939**

**SC-100**

**ಆರ್ಥಿಕ ಸಚಿವಾಲಯ**

**ವಿಷಯ :** ಬೆಂಗಳೂರು ನಗರದಲ್ಲಿ ಕಾರ್ಯನಿರ್ವಹಿಸುತ್ತಿರುವ ರಾಜ್ಯ ಸರ್ಕಾರಿ ನೌಕರರ ಮನೆ ಬಾಡಿಗೆ ಭತ್ಯೆ ದರಗಳ ಪರಿಷ್ಕರಣೆ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 18 ಎಸ್‌ಆರ್‌ಪಿ 2012, ದಿನಾಂಕ : 19–10–2012.
2. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 09 ಎಸ್‌ಆರ್‌ಪಿ 2013, ದಿನಾಂಕ : 18–03–2013.

**ಪ್ರಸ್ತಾವನೆ :**

2013–14ರ ಆಯವ್ಯಯ ಭಾಷಣದಲ್ಲಿ, ಮಾನ್ಯ ಮುಖ್ಯಮಂತ್ರಿಗಳು ಬೆಂಗಳೂರು ನಗರದಲ್ಲಿ ಕಾರ್ಯನಿರ್ವಹಿಸುತ್ತಿರುವ ರಾಜ್ಯ ಸರ್ಕಾರಿ ನೌಕರರ ಮನೆ ಬಾಡಿಗೆ ಭತ್ಯೆ ದರಗಳನ್ನು ಅವರ ಮೂಲ ವೇತನದ ಶೇ. 30ಕ್ಕೆ ಹೆಚ್ಚಿಸುವ ಸರ್ಕಾರದ ನಿರ್ಧಾರವನ್ನು ಘೋಷಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 05 ಎಸ್‌ಆರ್‌ಪಿ 2013, ಬೆಂಗಳೂರು, ದಿನಾಂಕ : 10ನೇ ಮೇ 2013.**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿರುವ, ರಾಜ್ಯ ಸರ್ಕಾರಿ ನೌಕರರ ಮನೆ ಬಾಡಿಗೆ ಭತ್ಯೆ ದರಗಳನ್ನು 01ನೇ ಏಪ್ರಿಲ್ 2013 ರಿಂದ ಜಾರಿಗೆ ಬರುವಂತೆ **ಮೂಲ ವೇತನದ ಶೇ. 25 ರಿಂದ ಶೇ. 30ಕ್ಕೆ** ಪರಿಷ್ಕರಿಸಿ ಆದೇಶಿಸಲು ಸರ್ಕಾರವು ಹರ್ಷಿಸುತ್ತದೆ.

2. ಈ ಆದೇಶಗಳು ಕರ್ನಾಟಕ ನಾಗರೀಕ ಸೇವಾ ನಿಯಮಗಳ ಉಪಬಂಧಗಳ ವ್ಯಾಪ್ತಿಯೊಳಗೆ ಬರುವ ಪೂರ್ಣಕಾಲಿಕ ಮತ್ತು ಕಾಲಿಕ ವೇತನ ಶ್ರೇಣಿಯಲ್ಲಿನ ಎಲ್ಲಾ ಸರ್ಕಾರಿ ನೌಕರರಿಗೂ ಅನ್ವಯವಾಗುತ್ತದೆ.

3. ಈ ಆದೇಶಗಳನ್ನು (i) ಕಾಲಿಕ ವೇತನ ಶ್ರೇಣಿಯಲ್ಲಿರುವ ವರ್ಕ್‌ಚಾರ್ಜ್ಡ್ ನೌಕರರು (ii) ಕಾಲಿಕ ವೇತನ ಶ್ರೇಣಿಯಲ್ಲಿರುವ ಅನುದಾನಿತ ಶಿಕ್ಷಣ ಸಂಸ್ಥೆಗಳ ಪೂರ್ಣಕಾಲಿಕ ನೌಕರರು ಮತ್ತು ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿ (iii) ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಯಲ್ಲಿ ವೇತನ ಪಡೆಯುತ್ತಿರುವ ವಿಶ್ವವಿದ್ಯಾನಿಲಯಗಳ/ಕಾಲೇಜುಗಳ ಬೋಧಕ ಸಿಬ್ಬಂದಿಗಳಿಗೆ ವಿಸ್ತರಿಸಲಾಗಿದೆ.

4. ಮನೆ ಬಾಡಿಗೆ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ 50 ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು 50 ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುಂದರ ರಾಜ ಗುಪ್ತ**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2).

## FINANCE SECRETARIAT

**SUB :** Revision of the rate of House Rent Allowance in respect of State Government employees working in Bangalore city-reg.

**READ :**
1. G.O. No. FD 18 SRP 2012, dated : 19-10-2012.
2. G.O. No. FD 9 SRP 2013, dated 18-03-2013.

**PREAMBLE :**

The Hon'ble Chief Minister in the Budget Speech 2013-14 has announced the Government's decision to enhance the House Rent Allowance of State Government employees working in Bangalore city to 30% of their basic pay. Accordingly the following orders are issued.

**GOVERNMENT ORDER NO. FD 05 SRP 2013, BANGALORE, DATED 10th May 2013.**

Government are pleased to order that the rate of House Rent Allowance in respect of State Government employees posted to any place within the limits of BBMP shall be revised from the existing **25% of basic pay to 30% of basic pay with effect from 01st April, 2013.**

2.These orders shall be applicable to all full time Government employees who are governed by the provisions of the Karnataka Civil Services Rules and who are on time scales of pay.

3. These orders are extended to (i) full-time employes borne on work-charged establishments of Government on time scale of pay (ii) full-time employees of the Aided educational institutions and non-teaching staff of the Universities who are on time-scale of pay and (iii) teaching staff of the Universities/Colleges who are drawing pay in the UGC/ICAR/AICTE scales of pay.

4. The payment on account of House Rent Allowance involving fractions of 50 paise and above shall be rounded off to the next rupee and fractions of less than 50 paise shall be ignored.

By Order and in the name of the Governor of Karnataka,
**SUNDARA RAJA GUPTHA**
Deputy Secretary to Government,
Finance Department (Services-2).

**P.R. 940**
**SC-500**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯಲ್ಲಿ ತಾತ್ಕಾಲಿಕವಾಗಿ ಸೃಜಿಸಿರುವ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 411 ಸಅಸೇ 2008, ದಿನಾಂಕ: 28–07–2009
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 559 ಸಅಸೇ 2011, ದಿನಾಂಕ: 04–03–2011
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 393 ಸಅಸೇ 2011, ದಿನಾಂಕ: 09–08–2011
4. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 551 ಸಅಸೇ 2012, ದಿನಾಂಕ: 07–09–2012
5. ಜಲಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಸನೀಇ 47 ಸೇಸಎ 2013; ದಿನಾಂಕ: 15–06–2013

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯಲ್ಲಿ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲಾಗಿದೆ ಮತ್ತು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದೆ. ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 27–07–2012ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

| ಕ್ರಮಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವೇತನ ಶ್ರೇಣಿ ರೂ. 28,100–50,100) | 01 |
| 2 | ಸಹಾಯಕ ಇಂಜಿನಿಯರ್ (ವೇತನ ಶ್ರೇಣಿ ರೂ. 22,800–43,200) | 03 |
| 3 | ಶೀಘ್ರಲಿಪಿಗಾರರು (ವೇತನ ಶ್ರೇಣಿ ರೂ. 16,000–29,600) | 01 |

ಮೇಲೆ ಕ್ರಮಸಂಖ್ಯೆ (5)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ದಿನಾಂಕ: 28–07–2009ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾದ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ದಿನಾಂಕ: 28–07–2013ರಿಂದ ಮತ್ತೊಂದು ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 559 ಸಅಸೇ 2013, ಬೆಂಗಳೂರು, ದಿನಾಂಕ : 10ನೇ ಸೆಪ್ಟೆಂಬರ್, 2013.**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿದ್ದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 27–07–2013ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರಮಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವೇತನ ಶ್ರೇಣಿ ರೂ. 28,100–50,100) | 01 |
| 2 | ಸಹಾಯಕ ಇಂಜಿನಿಯರ್ (ವೇತನ ಶ್ರೇಣಿ ರೂ. 22,800–43,200) | 03 |
| 3 | ಶೀಘ್ರಲಿಪಿಗಾರರು (ವೇತನ ಶ್ರೇಣಿ ರೂ. 16,000–29,600) | 01 |

ಮೇಲ್ಕಂಡ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ದಿನಾಂಕ: 28–07–2009ರ ಆದೇಶದಲ್ಲಿ ನಿಗದಿಪಡಿಸಲಾದ ಕ್ರಮಗಳನ್ನು ಅನುಸರಿಸಲು ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ: 10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

PR 931

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಭವನ, ನವದೆಹಲಿ, ಪ್ರಧಾನ ಕಾರ್ಯದರ್ಶಿ (ಸಮನ್ವಯ) ಹುದ್ದೆಯ ಪೂರಕ ಸಿಬ್ಬಂದಿ ಹುದ್ದೆಯಾದ ಹಿರಿಯ ಸಹಾಯಕ ಹುದ್ದೆಯನ್ನು ಮುಂದುವರಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 647 ಸಅಸೇ 2012, ದಿನಾಂಕ: 26–09–2012
2. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 245 ಆಸಸೇ 2012, ದಿನಾಂಕ: 05–10–2012 ಮತ್ತು ದಿನಾಂಕ: 08–10–2012

